## ಸೂ. 17   86. ಅತ್ತಾರಿಕ್   ರು. 1

اٰيَاتُهَا ١٧   سُوْرَةُ الطَّارِقِ مَكِّيَّةٌ   رُكُوْعُهَا ١

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ — بِسْمِ اللّٰهِ الرَّحْمٰنِ الرَّحِيْمِ ○

1. ಆಕಾಶದಾಣೆ ಮತ್ತು ರಾತ್ರಿಯಲ್ಲಿ ಕಾಣಿಸಿಕೊಳ್ಳುವ ವಸ್ತುವಿನಾಣೆ- — وَالسَّمَآءِ وَالطَّارِقِ ①

2. ರಾತ್ರಿ ಕಾಣಿಸಿಕೊಳ್ಳುವ ಆ ವಸ್ತುವೇನೆಂದು ನಿಮಗೇನು ಗೊತ್ತು? — وَمَآ اَدْرٰىكَ مَا الطَّارِقُ ②

3. ಮಿನುಗುವ ನಕ್ಷತ್ರ- — النَّجْمُ الثَّاقِبُ ③

4. ಮೇಲ್ವಿಚಾರಕನಿಲ್ಲದಂತಹ ಜೀವವೊಂದೂ ಇಲ್ಲ.[1] — اِنْ كُلُّ نَفْسٍ لَّمَّا عَلَيْهَا حَافِظٌ ④

5. ಇನ್ನು ಮನುಷ್ಯನು, ತಾನು ಯಾವ ವಸ್ತುವಿನಿಂದ ಸೃಷ್ಟಿಸಲ್ಪಟ್ಟಿರುವೆನು ಎಂಬುದನ್ನಾದರೂ ಸ್ವಲ್ಪ ನೋಡಿಕೊಳ್ಳಲಿ. — فَلْيَنْظُرِ الْاِنْسَانُ مِمَّ خُلِقَ ⑤

6. ಅವನು ಒಂದು ಚಿಮ್ಮುವ ದ್ರವದಿಂದ ಸೃಷ್ಟಿಸಲ್ಪಟ್ಟಿದ್ದಾನೆ- — خُلِقَ مِنْ مَّآءٍ دَافِقٍ ⑥

7. ಅದು ಬೆನ್ನು ಮತ್ತು ಎದೆಯ ಮೂಳೆಗಳ ನಡುವಿನಿಂದ ಹೊರಡುತ್ತದೆ.[2] — يَّخْرُجُ مِنْ بَيْنِ الصُّلْبِ وَالتَّرَآئِبِ ⑦

8. ಖಂಡಿತವಾಗಿಯೂ ಅವನು (ಆ ಸೃಷ್ಟಿಕರ್ತನು) ಅವನನ್ನು ಪುನಃ ಸೃಷ್ಟಿಸಲು ಶಕ್ತನು. — اِنَّهٗ عَلٰى رَجْعِهٖ لَقَادِرٌ ⑧

---

1. ಮೇಲ್ವಿಚಾರಕನೆಂದರೆ ಸ್ವತಃ ಅಲ್ಲಾಹನು. ಅವನು ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ಚಿಕ್ಕ-ದೊಡ್ಡ ಸೃಷ್ಟಿಗಳ ಮೇಲ್ವಿಚಾರಣೆ ಮತ್ತು ಸಂರಕ್ಷಣೆ ನಡೆಸುತ್ತಿದ್ದಾನೆ. ರಾತ್ರಿಯ ವೇಳೆ ಆಕಾಶದಲ್ಲಿ ಗೋಚರಿಸುವ, ಮಿನುಗುತ್ತಿರುವ ಅಸಂಖ್ಯ ಗ್ರಹ-ನಕ್ಷತ್ರಗಳ ಪೈಕಿ ಪ್ರತಿಯೊಂದರ ಅಸ್ತಿತ್ವವೂ ಅದನ್ನು ಸೃಷ್ಟಿಸಿದವನು, ಬೆಳಗಿಸಿದವನು ಮತ್ತು ಅಂತರಿಕ್ಷದಲ್ಲಿ ತೇಲಿಸಿದವನು ಒಬ್ಬನಿದ್ದಾನೆಂದು ಸಾಕ್ಷ್ಯವಹಿಸುತ್ತಿದೆ. ಅವನು ಅದನ್ನು ಯಾವ ರೀತಿ ನಿಯಂತ್ರಿಸುತ್ತಿದ್ದಾನೆಂದರೆ ಅದು ತನ್ನ ಸ್ಥಾನದಿಂದ ಕೆಳಗೆ ಬೀಳುವುದಿಲ್ಲ. ಅಸಂಖ್ಯ ನಕ್ಷತ್ರಗಳ ಪರಿಭ್ರಮಣದ ವೇಳೆ ಅವುಗಳಲ್ಲಿ ಯಾವುದೂ ಪರಸ್ಪರ ಢಿಕ್ಕಿ ಹೊಡೆಯುವುದಿಲ್ಲ. ಹೀಗೆ ಅಲ್ಲಾಹನು ನಿಸರ್ಗದ ಎಲ್ಲಾ ವಸ್ತುಗಳ ಮೇಲ್ವಿಚಾರಣೆ ನಡೆಸುತ್ತಿದ್ದಾನೆ.
2. ಸ್ತ್ರೀ ಮತ್ತು ಪುರುಷರ ಜನನದ ಬಿಂದುವು ಮನುಷ್ಯನ ಬೆನ್ನೆಲುಬು ಮತ್ತು ಪಕ್ಕೆಲುಬುಗಳ ಮಧ್ಯದಲ್ಲಿರುವ ಭಾಗದಿಂದ ಹೊರಡುತ್ತದೆ. ಆದ್ದರಿಂದ ಮಾನವನನ್ನು ಬೆನ್ನು ಮತ್ತು ಎದೆಯ ಮಧ್ಯದಿಂದ ಹೊರಡುವ ನೀರಿನಿಂದ ಸೃಷ್ಟಿಸಲಾಗಿದೆ ಎನ್ನಲಾಗಿದೆ.

9. ಅಡಗಿದ್ದ ರಹಸ್ಯಗಳ ವಿಚಾರಣೆ ನಡೆಯಲಿರುವ ದಿನ.[3]

يَوْمَ تُبْلَى السَّرَآئِرُ ۙ﴿٩﴾

10. ಅಂದು ಮಾನವನ ಬಳಿ ತನ್ನದಾದ ಯಾವ ಬಲವೂ ಇರಲಾರದು ಮತ್ತು ಅವನಿಗೆ ಯಾವ ಸಹಾಯಕನೂ ಇರಲಾರನು.

فَمَا لَهٗ مِنْ قُوَّةٍ وَّلَا نَاصِرٍ ؕ﴿١٠﴾

11. ಮಳೆ ಸುರಿಸುವ ಆಕಾಶದಾಣೆ-

وَالسَّمَآءِ ذَاتِ الرَّجْعِ ۙ﴿١١﴾

12. ಮತ್ತು (ಸಸ್ಯಗಳು ಮೊಳೆಯುವಾಗ) ಒಡೆಯುವ ಭೂಮಿಯಾಣೆ,

وَالْاَرْضِ ذَاتِ الصَّدْعِ ۙ﴿١٢﴾

13. ಇದೊಂದು ನಿರ್ಣಾಯಕ ಮಾತು,

اِنَّهٗ لَقَوْلٌ فَصْلٌ ۙ﴿١٣﴾

14. ಇದು ತಮಾಷೆಯಲ್ಲ.[4]

وَّمَا هُوَ بِالْهَزْلِ ؕ﴿١٤﴾

15. ಇವರು (ಮಕ್ಕಾದ ಸತ್ಯನಿಷೇಧಿಗಳು) ಕೆಲವು ಕುತಂತ್ರಗಳನ್ನು ಹೂಡುತ್ತಿದ್ದಾರೆ-

اِنَّهُمْ يَكِيْدُوْنَ كَيْدًا ۙ﴿١٥﴾

16. ಮತ್ತು ನಾನೂ ಒಂದು ತಂತ್ರ ಹೂಡುತ್ತಿದ್ದೇನೆ.

وَّاَكِيْدُ كَيْدًا ۚۖ﴿١٦﴾

17. ಆದುದರಿಂದ ಸಂದೇಶವಾಹಕರೇ, ಈ ಸತ್ಯನಿಷೇಧಿಗಳನ್ನು ಸ್ವಲ್ಪ ಸಮಯ ಅವರ ಪಾಡಿಗೆ ಬಿಟ್ಟು ಬಿಡಿರಿ.

فَمَهِّلِ الْكٰفِرِيْنَ اَمْهِلْهُمْ رُوَيْدًا ﴿١٧﴾ ع

---

3. ಅಡಗಿದ್ದ ರಹಸ್ಯಗಳೆಂದರೆ ಲೋಕದಲ್ಲಿ ರಹಸ್ಯವಾಗಿಯೇ ಉಳಿದ ವ್ಯಕ್ತಿಯ ಕರ್ಮಗಳು ಮತ್ತು ಕೇವಲ ಬಹಿರಂಗ ಸ್ವರೂಪ ಮಾತ್ರ ಲೋಕದ ಮುಂದೆ ಅನಾವರಣಗೊಂಡ ವ್ಯವಹಾರಗಳು. ಅದರ ಹಿಂದಿನ ಸಂಕಲ್ಪ, ಉದ್ದೇಶ ಮತ್ತು ಬಯಕೆಗಳು ಜನರಿಂದ ಗೌಪ್ಯವಾಗಿಯೇ ಉಳಿದಿರುತ್ತವೆ.

4. ಅರ್ಥಾತ್- ಆಕಾಶದಿಂದ ಮಳೆ ಸುರಿಯುವುದು ಮತ್ತು ಭೂಮಿ ಬಿರಿದು ಸಸ್ಯಗಳನ್ನು ಹೊರಡಿಸುವುದು ಕೇವಲ ಮೋಜಲ್ಲ. ಅದೊಂದು ಗಂಭೀರವಾದ ವಾಸ್ತವಿಕತೆ. ಹಾಗೆಯೇ ಮಾನವನೂ ಮತ್ತೊಮ್ಮೆ ಪ್ರಭುವಿನೆಡೆಗೆ ಮರಳಬೇಕಾಗಿದೆ ಎಂಬ ಕುರ್‌ಆನಿನ ಸೂಚನೆಯೂ ಕೇವಲ ಆಟ ವಿನೋದವಲ್ಲ. ಬದಲಾಗಿ ಅದೊಂದು ನಿಖರವಾದ ಮಾತಾಗಿದೆ.